# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | | 1488 (1758) |
| ಸದಸ್ಯರ ಹೆಸರು | | ಡಾ: ಜೈಮಾಲ ರಾಮಚಂದ್ರ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | | 23-03-2020 |
| ಉತ್ತರಿಸಬೇಕಾದ ಸಚಿವರು | | ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |
| ಪ್ರಶ್ನೆ | | ಉತ್ತರ |
| ಅ) | ರಾಜ್ಯದಲ್ಲಿ ಖಾಸಗಿ ಅನುದಾನಿತ ಪದವಿ ಕಾಲೇಜುಗಳ ಸಂಖ್ಯೆ ಎಷ್ಟು; ಸದರಿ ಕಾಲೇಜುಗಳಲ್ಲಿ ಮಂಜೂರಾದ ಬೋಧಕ ಮತ್ತು ಬೋಧಕೇತರ ಹುದ್ದೆಗಳು ಎಷ್ಟು; (ವಿವರ ನೀಡುವುದು) | ರಾಜ್ಯದಲ್ಲಿ ಒಟ್ಟು 320 ಖಾಸಗಿ ಅನುದಾನಿತ ಪದವಿ ಕಾಲೇಜುಗಳು ಇರುತ್ತವೆ. ಸದರಿ ಕಾಲೇಜುಗಳಲ್ಲಿ ಮಂಜೂರಾದ ಬೋಧಕ-ಬೋಧಕೇತರ ಹುದ್ದೆಗಳ ಸಂಖ್ಯಾ ಮಾಹಿತಿ ಕೆಳಕಂಡಂತಿರುತ್ತದೆ.<br><br>ಬೋಧಕರು-9329<br><br>ಬೋಧಕೇತರರು-6670 |
| ಆ) | ಸದರಿ ಕಾಲೇಜುಗಳಲ್ಲಿ ನಿವೃತ್ತಿ, ಮರಣ ಹಾಗೂ ವರ್ಗಾವಣೆಯಿಂದಾಗಿ ಎಷ್ಟು ಹುದ್ದೆಗಳು ಖಾಲಿ ಇವೆ; (ಜಿಲ್ಲಾವಾರು ವಿವರ ನೀಡುವುದು) | ಸದರಿ ಕಾಲೇಜುಗಳಲ್ಲಿ ನಿವೃತ್ತಿ, ನಿಧನ ಹಾಗೂ ಇನ್ನಿತರ ಕಾರಣಗಳಿಂದ ಒಟ್ಟು 6230 ಬೋಧಕ ಹುದ್ದೆಗಳು ಹಾಗೂ 4355 ಬೋಧಕೇತರ ಹುದ್ದೆಗಳು ಖಾಲಿ ಇರುತ್ತದೆ.<br><br>(ಜಿಲ್ಲಾವಾರು ವಿವರಗಳ ಬಗ್ಗೆ ಅನುಬಂಧದಲ್ಲಿ ನೀಡಿದೆ.) |
| ಇ) | ಈ ಹುದ್ದೆಗಳ ಭರ್ತಿಗೆ ಅನುಮತಿ ನೀಡದೇ ಇರುವುದರಿಂದ ಉನ್ನತ ಶಿಕ್ಷಣದಿಂದ ವಿದ್ಯಾರ್ಥಿಗಳು ವಂಚಿತರಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಖಾಸಗಿ ಅನುದಾನಿತ ಪ್ರಥಮ ದರ್ಜೆ ಕಾಲೇಜುಗಳಲ್ಲಿ ದಿನಾಂಕ:31.12.2015ರ ವರೆಗೆ ವಿವಿಧ ಕಾರಣಗಳಿಂದ ತೆರವಾಗಿರುವ ಬೋಧಕರ ಹುದ್ದೆಗಳನ್ನು (ಗ್ರಂಥಪಾಲಕರು ಮತ್ತು ದೈಹಿಕ ಶಿಕ್ಷಣ ನಿರ್ದೇಶಕರ ಹುದ್ದೆಗಳೂ ಒಳಗೊಂಡಂತೆ) ಕೆಲವೊಂದು ಷರತ್ತಿಗೊಳಪಟ್ಟು ಭರ್ತಿ ಮಾಡಲು ಸರ್ಕಾರದ ಪತ್ರ ಸಂಖ್ಯೆ: ಇಡಿ/240/ಯುಪಿಸಿ/2014, ದಿನಾಂಕ: 01.09.2017ರಲ್ಲಿ ಸರ್ಕಾರವು ಸಹಮತಿಸಿದೆ. ಆಡಳಿತ ಮಂಡಳಿಗಳಿಂದ ಆಯ್ಕೆ ಸಮಿತಿ ಮೂಲಕ ಖಾಲಿ ಇರುವ ಹುದ್ದೆಗಳಿಗೆ ನಿಯಮಾನುಸಾರ ನೇಮಕಾತಿ ಮಾಡಿಕೊಂಡು ಆಯುಕ್ತರ ಮೂಲಕ ಸರ್ಕಾರಕ್ಕೆ ಬಂದ ಪ್ರಸ್ತಾವನೆಗಳಲ್ಲಿ ಒಟ್ಟು 894 ಬೋಧಕರ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಈಗಾಗಲೇ ಸಂಬಂಧಪಟ್ಟ ಆಡಳಿತ ಮಂಡಳಿಗಳಿಗೆ ಅನುಮತಿ ನೀಡಲಾಗಿದೆ.<br><br>ಆಯುಕ್ತರಿಂದ ಸ್ವೀಕರಿಸಲಾದ ಪ್ರಸ್ತಾವನೆಗಳನ್ನು ನಿಯಮಾನುಸಾರ ಪರಿಶೀಲಿಸಿ ಅನುಮೋದನೆ ನೀಡಲಾಗುವುದು.<br><br>ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ/551/ಯುಪಿಸಿ/99, ದಿ:07.08.2003ರ ನಿಯಮ 8(2)ರನ್ವಯ ದಿನಾಂಕ:01.03.2001 ರಂದು ಹಾಗೂ ನಂತರ ನಿವೃತ್ತಿ, ನಿಧನ, ರಾಜೀನಾಮೆ ಹಾಗೂ ಇನ್ನಿತರ ಕಾರಣಗಳಿಂದ ತೆರವಾಗುವ ಎಲ್ಲಾ ಬೋಧಕೇತರ |

| | | |
|---|---|---|
| | | ಹುದ್ದೆಗಳು ಶಾಶ್ವತ ಅನುದಾನರಹಿತ ಹುದ್ದೆಗಳೆಂದು ಪರಿಗಣಿಸಲ್ಪಟ್ಟಿರುತ್ತದೆ. ಆದ್ದರಿಂದ, ಖಾಸಗಿ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ ಖಾಲಿ ಇರುವ ಬೋಧಕೇತರ ಹುದ್ದೆಗಳನ್ನು ಭರ್ತಿ ಮಾಡಲು ಪ್ರಸ್ತುತ ಅವಕಾಶವಿರುವುದಿಲ್ಲ. |

ಇಡಿ 76 ಯುಪಿಸಿ 2020

(ಡಾ: ಅಶ್ವಥ್ ನಾರಾಯಣ ಸಿ.ಎನ್.)
ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ)

**ಅನುಬಂಧ**

ಇಲಾಖಾ ವ್ಯಾಪ್ತಿಯಲ್ಲಿ ಬರುವ ಖಾಸಗಿ ಅನುದಾನಿತ ಪ್ರಥಮದರ್ಜೆ ಕಾಲೇಜುಗಳಲ್ಲಿ ನಿವೃತ್ತಿ, ನಿಧನ, ವರ್ಗಾವಣೆ ಹಾಗೂ ಇನ್ನಿತರೆ ಕಾರಣಗಳಿಂದ ತೆರವಾಗಿರುವ ಬೋಧಕ-ಬೋಧಕೇತರ ಖಾಲಿ ಹುದ್ದೆಗಳ ವಿವರ(ಜಿಲ್ಲಾವಾರು).

| ಕ್ರಮ ಸಂಖ್ಯೆ | ಜಿಲ್ಲಾವಾರು | ಬೋಧಕ | ಬೋಧಕೇತರ |
|---|---|---|---|
| 01 | ಬೆಂಗಳೂರು ನಗರ | 1147 | 795 |
| 02 | ಬೆಂಗಳೂರು ಗ್ರಾಮಾಂತರ | 30 | 29 |
| 03 | ರಾಮನಗರ | 85 | 48 |
| 04 | ಚಿಕ್ಕಬಳ್ಳಾಪುರ | 56 | 62 |
| 05 | ಕೋಲಾರ | 91 | 53 |
| 06 | ತುಮಕೂರು | 204 | 177 |
| 07 | ಮೈಸೂರು | 302 | 187 |
| 08 | ಚಾಮರಾಜನಗರ | 53 | 42 |
| 09 | ಮಂಡ್ಯ | 127 | 70 |
| 10 | ಹಾಸನ | 118 | 77 |
| 11 | ದಕ್ಷಿಣಕನ್ನಡ | 382 | 274 |
| 12 | ಉಡುಪಿ | 215 | 149 |
| 13 | ಕೊಡಗು | 41 | 31 |
| 14 | ಬೆಳಗಾವಿ | 538 | 384 |
| 15 | ಗದಗ್ | 112 | 97 |
| 16 | ಕಾರವಾರ | 200 | 251 |
| 17 | ಹಾವೇರಿ | 105 | 143 |
| 18 | ಬಾಗಲಕೋಟೆ | 137 | 154 |
| 19 | ವಿಜಯಪುರ | 225 | 163 |
| 20 | ಧಾರವಾಡ | 289 | 261 |
| 21 | ಬೀದರ್ | 234 | 147 |
| 22 | ಕಲಬುರಗಿ | 250 | 157 |
| 23 | ಯಾದಗಿರಿ | 15 | 20 |
| 24 | ರಾಯಚೂರು | 72 | 51 |
| 25 | ಕೊಪ್ಪಳ | 54 | 32 |
| 26 | ಬಳ್ಳಾರಿ | 199 | 107 |
| 27 | ಶಿವಮೊಗ್ಗ | 170 | 104 |
| 28 | ಚಿಕ್ಕಮಗಳೂರು | 75 | 58 |
| 29 | ದಾವಣಗೆರೆ | 569 | 153 |
| 30 | ಚಿತ್ರದುರ್ಗ | 135 | 79 |
| | ಒಟ್ಟು | 6230 | 4355 |